ಕೊಡುಗೆ : ಕ. ಮಾ. ರಾಮಚಂದ್ರ

## ಮರೆತು ಮತ ನೀಡುವುದುಂಟೆ?

ಮತಯಾಚಿಸುವ ರಾಜಕೀಯ ಪ್ರಹಸನಗಳು ಬೀದಿ ನಾಟಕಗಳು ಡಿಸೆಂಬರ್ 16 ರಿಂದ ಜನವರಿ ಮೊದಲವಾರದವರೆಗೆ ನಡೆಯಲಿವೆ ಜನರು ಬಂದು ನೋಡಿ ಆನಂದಿಸಿ ಹೋಗಬೇಕಾಗಿಲ್ಲ. ಒಪೆಯು ಬೇಕಾಗಿದೆ. ಮುಖ-ಮೂತಿ ಇರದ ನಾಯಕರೆಂದು ಕೊಳ್ಳುವವರೆಲ್ಲ ನಿರುದ್ಯೋಗ ಹೋಗಲಾಡಿಸುತ್ತೇವೆ, ಭ್ರಷ್ಟಾಚಾರ ತೊಲಗಿಸುತ್ತೇವೆ. ಜಾತೀಯತೆ ಹೋಗಲಾಡಿಸುತ್ತೇವೆ. ದಾರಿದ್ರ್ಯವನ್ನ ಓಡಿಸುತ್ತೇವೆ. ಇತ್ಯಾದಿ ಆಶ್ವಾಸನೆ, ಘೋಷಣೆಗಳನ್ನು ನರಕಿತ್ತುಕೊಂಡು ಕೂಗಲು ಪ್ರಾರಂಭಿಸುತ್ತಾರೆ. ಇದನ್ನು ಕೆಲವರು ನಂಬುವುದಿಲ್ಲ. ಹಲವರು ನಂಬಿ ಮೋಸಹೋಗುತ್ತಾರೆ. ಮತ್ತೆ ಐದು ವರ್ಷಗಳ ತನಕ ಇವರು ಸಿಗುವುದಿಲ್ಲ. ಇವರ ನೆರಳುಗಳು ಮಾತ್ರ ಜಾತೀಯತೆ ಭ್ರಷ್ಟಾಚಾರ, ಸ್ವಾರ್ಥ ಮುಂತಾದ ನಾನಾ ರೂಪಗಳನ್ನು ಪಡೆದು ಜನರನ್ನು ಗೋಳಾಡಿಸುತ್ತದೆ ಜನರನ್ನು ಗೋಳಾಡಿಸುತ್ತವೆ. ಜನಮರೆಯುತ್ತಾರೆ! ಯಥಾಸ್ಥಿತಿ ಜಾತಿ ಗಲಭೆಗಳು ಕೋಮು ಗಲಭೆಗಳು ಅತ್ಯಾಚಾರಗಳು-ದೌರ್ಜನ್ಯಗಳು ಹಿಮಾಲಯದೆತ್ತರಕ್ಕೆ ಬೆಳೆಯುತ್ತವೆ.

ಉದಾಹರಣೆಗೆ ಕಾಂಗ್ರೆಸ್ಸೆಂಬ ಆಷಾಢಭೂತಿ ನಾಯಕರುಳ್ಳ ಪಕ್ಷವು ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಜಾತಿ, ಪ್ರಾಂತೀಯ ಶಕ್ತಿಗಳ ವಿರುದ್ಧ ಹೋರಾಡುವುದು, ರಾಷ್ಟ್ರೀಯತೆಯನ್ನು ಬೆಳೆಸುವುದು ದಾರಿದ್ರ್ಯವನ್ನು ನಿರ್ಮೂಲನ ಮಾಡುವುದಾಗಿ ಜನತೆಗೆ ನಂಬಿಸಲು ಹೊರಟಿದೆ. ದಾರಿದ್ರ್ಯ ನಿರ್ಮೂಲನವೆಲ್ಲಿ? ಕಾಂಗ್ರೆಸ್ಸಿನಲ್ಲಿರುವವರ ದಾರಿದ್ರ್ಯ ನಿರ್ಮೂಲನವಾದರೆ ಸಾಕಾಗಿದೆ ಕಾಂಗ್ರೆಸ್ ಸರ್ಕಾರಗಳಿರುವ ರಾಜ್ಯಗಳಲ್ಲಿ ಜಾತಿ ಕೋಮುಗಲಬೆಗಳಿಂದ ಸತ್ತವರಿಗೆ ಲೆಕ್ಕವುಂಟೆ? ಕಾಂಗ್ರೆಸ್ಸಿನಲ್ಲಿರುವ ರಾಷ್ಟ್ರದ್ರೋಹಿಗಳಿಗಿಂತ ಬೇರೆಯಾರಿದ್ದಾರೆ? ಜನತೆ ಇದನ್ನೆಲ್ಲ ಮರೆಯಬಹುದೆ? ಜನನಾಯಕರ ಜನಸೇವೆಯ ತನಿಖೆ ನಡೆಸಬೇಕಾಗಿದೆ.


# ಪಂಚಮ

ಸಂಪುಟ: 6 ಸಂಚಿಕೆ-23 ಬೆಲೆ-50 ಪೈಸೆ ಡಿಸೆಂಬರ್ 20, 1982


## ನೊಂದವರ ನೋವನತ್ತ ಬಲ್ಲರು?

ತುಮಕೂರು ತಾಲ್ಲೂಕಿನ ಗೋಳೂರು ಮತ್ತು ಹೊನ್ನೇನಹಳ್ಳಿ ದಲಿತರು ಉಳಮೆ ಮಾಡುತ್ತಿರುವ ಗೋಮಾಳ ಮಂಜುರಾತಿಗೆ ನಡೆಸಿದ ಹೋರಾಟ ಸಂದರ್ಭದಲ್ಲಿ ತುಮಕೂರಿನ ದ. ಸಂ. ಸ. ಸಂಚಾಲಕರಾದ ನಾಗರಾಜರ ಮೇಲೆ ಹಲ್ಲೆ ನಡೆಸಲಾಗಿದ್ದು ತೀವ್ರ ಗಾಯಗಳಾಗಿವೆ ಹೋರಾಟ ತೀವ್ರವಾಗುತ್ತಿದ್ದರೂ ಅಲ್ಲಿಯ ಅಧಿಕಾರಿಗಳು, ರಾಜಕಾರಣಿಗಳು ಚೂರು ಮನಸ್ಸಿಗೆ ಹಾಕಿಕೊಂಡಿಲ್ಲ ಇತ್ತ ದಲಿತರಲ್ಲಿ ಉತ್ಸಾಹಕ್ಕೇನು ಭಂಗಬಂದಿಲ್ಲ.

8-12-82 ರಂದು ದಲಿತ ಮಹಿಳಾ ಒಕ್ಕೂಟ ತುಮಕೂರು ಶಾಖೆಯು ಗೋಳೂರು ಮತ್ತು ಹೊನ್ನೇನಹಳ್ಳಿ ದಲಿತರ ಭೂ ಹೋರಾಟಕ್ಕೆ ಬೆಂಬಲಿಸಿ ಮೆರವಣಿಗೆ ಧರಣಿ ಸತ್ಯಾಗ್ರಹವನ್ನು ನಡೆಸಿದೆ. ಎಸ್. ಆರ್. ಕಾಲೋನಿ, ಜಯಪುರ. ಕುರಿಪಾಳ್ಯ ಸಂತೆಪೇಟೆ ಮೆಳೆಕೋಟೆ, ಗೋಳೂರು ಹೊನ್ನನಹಳ್ಳಿಯ ಸುಮಾರು 600 ದಲಿತ ಮಹಿಳೆಯರು ಮೆರವಣಿಗೆ ಹಾಗು ಧರಣಿಯಲ್ಲಿ ಭಾಗವಹಿಸಿ ಹೋರಾಟಕ್ಕೆ ತೀವ್ರತೆಯನ್ನು, ತಂದಿದ್ದಾರೆ. ಜಿಲ್ಲಾಧಿಕಾರಿಗಳನ್ನು ಭೇಟಿ ಮಾಡುವ ಸಂದರ್ಭಕ್ಕೆ ಡಿ. ಸಿ. ಯವರು ಮಹಿಳಾ ಕಾರ್ಯಕರ್ತರನ್ನು ಭೇಟಿಮಾಡದ ಮಹಿಳೆಯರು ಮುಂದಿನ ಬಾಗಿಲ ಬಳಿ ಇದ್ದಾಗ ಹಿಂದಿನಿಂದಲೂ, ಹಿಂದಿನ ಬಾಗಿಲ ಬಳಿ ಬಂದಾಗ ಮುಂದಿನಿಂದಲೂ ತಪ್ಪಿಸಿಕೊಂಡು ಹೋಗಲು ಹೊಂಚುಹಾಕಿದರು. ಕೊನೆಗೆ ಎರಡು ಬಾಗಿಲ ಬಳಿ ಜನರು ಘೇರಾಯಿಸಿದಾಗ ಅನಿವಾರ್ಯವಾಗಿ ಮನವಿಯನ್ನು ತೆಗೆದುಕೊಳ್ಳಬೇಕಾಯಿತು ಮಂಜೂರಾತಿಗೆ ಬಗ್ಗೆ ಏನೂ ಹೇಳದ ಜಿಲ್ಲಾಧಿಕಾರಿ ಶ್ರೀಮತಿ ವತ್ಸಲಾ ಅವರು ಸರ್ಕಾರಕ್ಕೆ ಬರೆದಿರುವುದಾಗಿಯೂ ಈ ಬಗ್ಗೆ ಆದೇಶ ಬಂದಂತೆ ಮಾಡುವುದಾಗಿಯೂ ತಮಗೆಯಾವ ಅಧಿಕಾರವಿಲ್ಲವೆಂದೂ, ಓಟು ಹಾಕಿದ ರಾಜಕಾರಣಿಗಳ ಬಳಿ ಹೋಗಿ ಕೇಳಿ ಎಂದು ಹೇಳಿ ತಾವು ತುಮಕೂರಿನ ಪುಢಾರಿಗಳಿಗಿಂತ ಕಡಿಮೆಯೇನಲ್ಲವೆಂದು ತೋರಿಸಿಕೊಂಡಿದ್ದಾರೆ. ಕಾರ್ಯಕರ್ತರ ಪ್ರಶ್ನೆಗಳಿಗೆ ಉತ್ತರಿಸಲಾರದೆ ಪೋಲೀಸರನ್ನು ಕರೆದು ಮಹಿಳೆಯರನ್ನು ಆಚೆಗೆ ದಬ್ಬಿಸಿರುವ ಘಟನೆ ವರದಿಯಾಗಿದೆ. ಇದರಿಂದ ಸಿಟ್ಟಿಗೆದ್ದ ಮಹಿಳೆಯರು ಹೋರಾಟದಲ್ಲಿ ಸಕ್ರಿಯ ಪಾತ್ರವಹಿಸಲು ನಿರ್ಧರಿಸಿದ್ದಾರೆ.



ತುಮಕೂರು ತಾ। ಗೋಳೂರು, ಹೊನ್ನೇನ ಹಳ್ಳಿಯ ಎಲ್ಲಾ ಜಾತಿಯ ಬಡವರು ಉಳುತ್ತಿರುವ ಸರ್ಕಾರಿ ಗೋಮಾಳವನ್ನು ಮಂಜೂರು ಮಾಡುವಂತೆ ಹಸಿದವರ ಕೂಗಿಗೆ ಕಿವುಡಾಗಿರುವ ಅಧಿಕಾರಿಗಳ ನಿರ್ಲಕ್ಷ್ಯ ರಾಜಕಾರಣಿಗಳ ಕುತಂತ್ರದ ವಿರುದ್ಧ ದಲಿತ ಸಂಘರ್ಷ ಸಮಿತಿಯು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಸರದಿ ಉಪವಾಸ ಸತ್ಯಾಗ್ರಹವನ್ನು ನಡೆಸುತ್ತಿದೆ.

# ಅಸ್ಪೃಶ್ಯತೆಯ ನಿವಾರಣೆ

# ಒಂದು ಸಾಮಾಜಿಕ ಹೊಣೆ

ದೈವ ಸೃಷ್ಟಿಯಲ್ಲಿ ಮಾನವರೆಲ್ಲ ಒಂದೇ. ಅಸ್ಪೃಶ್ಯತೆ ಎನ್ನುವುದು ಮಾನವತೆಗೇ ಕಳಂಕ ತರುವಂಥದು. ಇದು ಮಾನವರೇ ಸೃಷ್ಟಿಸಿಕೊಂಡ ಅಂತರ. ಈ ಸಾಮಾಜಿಕ ಪಿಡುಗನ್ನು ತೊಡೆದು ಹಾಕುವುದು ಇಡೀ ಸಮಾಜದ ಜವಾಬ್ದಾರಿ. ಇದನ್ನರಿತ ಸರ್ಕಾರ ಅಸ್ಪೃಶ್ಯತಾ ನಿವಾರಣೆಗೆ ಸತತ ಶ್ರಮಿಸುತ್ತಿದೆ.

ಹರಿಜನರಿಗೆ ಸಾರ್ವಜನಿಕ ಹೊಟೆಲುಗಳಲ್ಲಿ ಊಟ ತಿಂಡಿ ನೀಡಿಲು ನಿರಾಕರಿಸುವುದು, ಜಾತಿಯ ಆಧಾರದ ಮೇಲೆ ನಿಂದಿಸುವುದು, ಸಾರ್ವಜನಿಕ ಬಾವಿಗಳಲ್ಲಿ ನೀರು ತರುವುದನ್ನು ತಡೆಯುವುದು, ದೇವಸ್ಥಾನಗಳಿಗೆ ಪ್ರವೇಶ ಪ್ರತಿಬಂಧಿಸುವುದು ಹಾಗೂ ಈ ವರ್ಗದ ಜನರನ್ನು ಕೆಲಸಕ್ಕೆ ನೇಮಿಸಿಕೊಳ್ಳಲು ನಿರಾಕರಿಸುವುದು--ಮುಂತಾದ ಸಮಾಜ ವಿರೋಧಿ ಕಾರ್ಯಗಳು ಅಪರಾಧವೆನಿಸುತ್ತವೆ. ಹಾಗೆ ಮಾಡುವವರು ಕಾನೂನಿನನ್ವಯ ಶಿಕ್ಷಾರ್ಹರು.

ಇಂತಹ ಅವಹೇಳನಕ್ಕೆ ಒಳಗಾದ ವ್ಯಕ್ತಿಗಳು ಆ ಬಗ್ಗೆ ಸಮೀಪದ ಪೋಲೀಸ್ ಠಾಣೆಗೆ ದೂರು ನೀಡಬೇಕು. ಅಸ್ಪೃಶ್ಯತಾ ನಿವಾರಣೆಗೆ ನೆರವಾಗಬೇಕು.

ಪ್ರಕಟಣೆ : ವಾರ್ತಾ ಮತ್ತು ಪ್ರಚಾರ ಇಲಾಖೆ, ಕರ್ನಾಟಕ ಸರ್ಕಾರ ಬೆಂಗಳೂರು.

# ಶಿಕ್ಷಣರಂಗದ ಕಿಡಿಗೇಡಿಗಳು!

ಹುಣಸೂರು ತಾಲ್ಲೋಕು, ರತ್ನಪುರಿ ಎಂಬ ಊರಿನಲ್ಲಿ ಸರ್ಕಾರಿ ಹೈಸ್ಕೂಲ್ ಒಂದಿದೆ. ಹೆಸರಿಗೆ ಸರ್ಕಾರದ್ದಾದರು ಇಲ್ಲಿನ ಜಾತಿ ಜಿಡ್ಡಿನ ಕೆ. ಬಸವರಾಜು ಎಂಬ ಸವರ್ಣೀಯ ಮುಖ್ಯೋಪಾಧ್ಯಾಯರದೆ ಪಾರುಪತ್ಯ. ಸುಮಾರು ಏಳೆಂಟು ಜನ ಉಪಾಧ್ಯಾಯರಿರುವ ಈ ಶಾಲೆಯಲ್ಲಿ ಮೂರು ಜನ ಉಪಾಧ್ಯಾಯರು ದಲಿತ ಜನಾಂಗಕ್ಕೆ ಸೇರಿದವರು. ಜಾತಿ ಧರ್ಮಗಳನ್ನೂ ಖಂಡಿಸಬಲ್ಲವರು. ಅನ್ಯಾಯಗಳ ವಿರುದ್ಧ ಎದೆಬಿಚ್ಚಿ ಮಾತನಾಡಬಲ್ಲವರು. ದಲಿತರ ಸೊಂಕನ್ನೇ ಸಹಿಸದ ಇಲ್ಲಿನ ಮುಖ್ಯೋಪಾಧ್ಯಾಯ ಸಣ್ಣ ಪುಟ್ಟ ವಿಷಯಗಳಿಗೂ ಜಾತಿ ಹೆಸರಿನಲ್ಲಿ ಹಂಗಿಸಿ ಮಾತನಾಡಬಲ್ಲವರು ಮತ್ತು ನಾನಾ ರೀತಿಯಿಂದ ತೊಂದರೆ ಕೊಡಬಲ್ಲವರು.

ದಲಿತ ಉಪಾಧ್ಯಾಯರುಗಳು ಹಬ್ಬಕ್ಕೆ ರಜ ಕೇಳಿದರೆ ದಲಿತರಿಗ್ಯಾವುದರ ಹಬ್ಬ, ಜಾತಿ-ನೋಡಿ ರಜ ಕೊಡುತ್ತೇನೆ ಎನ್ನುತ್ತಾರೆ. ತಮಗೆ ಮೀಸಲಾದ ಆಕಸ್ಮಿಕ ರಜ ತೆಗೆದು ಕೊಳ್ಳಬೇಕಾದರೆ ದಲಿತ ಉಪಾಧ್ಯಾಯರುಗಳು ಮೊದಲೇ ಸಮ್ಮತಿ ಪಡೆಯಬೇಕಂತೆ, ನಾಳೆ ಆಗುವ ಅಘಾತವನ್ನು ಇಂದೇ ಊಹಿಸಿ ಹೇಳಬೇಕಂತೆ. [ಉದಾ : ನಾಳೆ ನಮ್ಮ ಅಪ್ಪ ಸಾಯಲಿದ್ದಾರೆ ರಜಕೊಡಿ] ರಜ ಪಡೆಯಬೇಕಾದರೆ ಮುಖ್ಯೋಪಾಧ್ಯಾಯರ ಮನೆಗೆ ಮೂರು ದಿನ ಮೊದಲೆ ಹೋಗಿ ಬೇಡಿ ಕೊಳ್ಳಬೇಕಂತೆ. ಇನ್ನುಳಿದ ಸವರ್ಣೀಯ ಮಾಸ್ತರಿಗೆ ದುಸರ ಮಾತನಾಡದೆ ರಜಾ ನೀಡುವ, ಪ್ರಸೆಂಟ್ ಹಾಕುವ ಈತ ದಲಿತ ಉಪಾಧ್ಯಾಯರಿಗೆ ಕುಂತರೂ, ನಿಂತರೂ 'ಮೆಮೋ' ಹಾಕುತ್ತಾರೆ. ಐದು ನಿಮಿಷ ತಡವಾಗಿ ಬಂದರೂ ಬರವಣಿಗೆಯಲ್ಲೇ ಉತ್ತರ ಪಡೆಯ ಬಯಸುವ ಈ ತೊಗಲಕ್ ದೊರೆ ಎರಡು-ಮೂರು ಗಂಟೆ ತಡವಾಗಿ ಬಂದರೂ ಪರವಾಗಿಲ್ಲವಂತೆ. ಮೂರು ಜನ ದಲಿತ ಉಪಾಧ್ಯಾಯರು ಇರುವುದನ್ನೇ ಸಹಿಸದ ಈ ಜಾತಿ ಬಸವರಾಜುಗೆ, ದಲಿತ ಜನಾಂಗಕ್ಕೆ ಸೇರಿದ ನಾರಾಯಣಸ್ವಾಮಿ ಹೊಸದಾಗಿ ಗುಮಾಸ್ತನಾಗಿ ಬಂದದ್ದು ಗಾಯದ ಮೇಲೆ ಬರೆ ಎಳೆದಂತಾಗಿದೆ.

ಸ್ವತಂತ್ರ ದಿನಾಚರಣೆಯಂದು ದಲಿತ ಉಪಾಧ್ಯಾಯ ಪುಟ್ಟನಂಜಯ್ಯ, ದೇವೂಲಿ, ಕೆಸ್ತಾರ, ಸಾಧುಪುರ, ದಲಿತರ ಕಗ್ಗೊಲೆಗಳನ್ನು ಪ್ರತಿಭಟಿಸಿ ಸ್ವಾತಂತ್ರ್ಯದ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದಕ್ಕೆ, ಬಸವರಾಜು ಏನೆಂದರು ಗೊತ್ತೆ ? "ಬಿದ್ದಿದ್ದವನಿಗೆ ಬಿಸಿಟ್ಟು ಕೊಟ್ರೆ ಎದ್ಬಂದು ಯಡ್ಗೊದ್ನಂತೆ" ಎಂದು ಕಣ್ಣುಗಳನ್ನೂ ಕೆಂಡಮಾಡಿಕೊಂಡನಂತೆ. ಹೆಸರಿಗೆ-ಕೊಸರಿಗೆಲ್ಲ ದಲಿತ ಉಪಾಧ್ಯಾಯರನ್ನೇ ದೂರುವ ಬಸವರಾಜುವನ್ನು ದಲಿತಕವಿ ಸಿದ್ದಲಿಂಗಯ್ಯ ಹೇಳುವಂತೆ "ಕ್ವಿಟ್ ಇಂಡಿಯಾ" ಎನ್ನಬೇಕಾಗುತ್ತದೇನೋ ?

—ಹೆಚ್. ಎಸ್. ರಾಜೇಂದ್ರಸಿಂಗ್

ದುಷ್ಟಶಕ್ತಿಗಳ ಕೈವಾಡ :

## ಪ್ರಾಮಾಣಿಕ ಸಬ್‌ಇನ್ಸ್‌ಪೆಕ್ಟರ್ ಲಕ್ಷ್ಮಣರ ಅಮಾನತು

ಚಿಕ್ಕಮಗಳೂರು ಜಿಲ್ಲೆಯ ನರಸಿಂಹರಾಜಪುರದ ಪೋಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಆರ್. ಲಕ್ಷ್ಮಣ್‌ರವರನ್ನು ಅಮಾನತ್ತಿನಲ್ಲಿ ಇಡಲಾಗಿದೆ. ಈ ಸಸ್ಪೆನ್‌ಷನ್‌ಗೆ ಅಲ್ಲಿಯ ಡಾ|| ನಾಗರಾಜ್ ಎಂಬ ಖೂಳ ಕಾರಣನಾಗಿದ್ದಾನೆಂದು ತಿಳಿದುಬಂದಿದೆ.

1972 ರಿಂದಲೂ ನರಸಿಂಹರಾಜಪುರ ತಾಲ್ಲೂಕಿನ ಮಡಬೂರಿನ ಸ. ನಂ. 40 ರಲ್ಲಿ ಅನೇಕ ಬಡವರು ಜಮೀನಿನ ಮಂಜೂರಾತಿಗೆ ಅರ್ಜಿ ಸಲ್ಲಿಸಿದ್ದು, ಆ ಜಮೀನನ್ನು ನುಂಗಿ ನೊಣೆಯುವ ಉದ್ದೇಶದಿಂದ ಡಾ|| ನಾಗರಾಜ್ ಎಂಬ ಈ ಗಡವ ಜೂಜು ಪುಂಡಾಟಿಕೆ, ವೇಶ್ಯವಾಟಿಕೆ, ದಲಿತರ ಮೇಲಿನ ದೌರ್ಜನ್ಯಗಳಿಗೆ ಸಿಂಹಸ್ವಪ್ನವಾಗಿದ್ದ ಲಕ್ಷ್ಮಣ್ ಜಮೀನಿನ ಹೋರಾಟದ ವೇಳೆಯಲ್ಲಿ ದಲಿತರ ಪರವಾಗಿದ್ದುದನ್ನು ಸಹಿಸಲಾರದೆ ಅವರ ಅಮಾನತ್ತಿಗೆ ಕಾರಣನಾಗಿದ್ದಾನೆ. ಜಮೀನಿನ ಮಂಜೂರಾತಿಯನ್ನು ಕಾಯುತ್ತ ಅದೇ ಜಮೀನಿನಲ್ಲಿ ಕಟ್ಟಿದ್ದ ಗುಡಿಸಲುಗಳಿಗೆ ಡಾ|| ನಾಗರಾಜ ಬೆಂಕಿಯಿಟ್ಟು, ಭೂ ಹೀನರು ತಲೆಯೆತ್ತಿ ಬದುಕದಂತೆ ಮಾಡಲು ರಾಜಕೀಯ ವ್ಯಕ್ತಿಗಳು, ಸರ್ಕಾರಿ ಅಧಿಕಾರಿಗಳನ್ನು ಬಳಸಿಕೊಂಡು ನಾಚಿಕೆಯಿಲ್ಲದೆ ಓಡಾಡುತ್ತಿರುವುದಾಗಿ ವರದಿಯಾಗಿದೆ.

ಲಕ್ಷ್ಮಣ್ ಅವರು ಪ್ರಾಮಾಣಿಕರಾಗಿದ್ದು, ರಾಜಕಾರಣಿಗಳಿಗೆ ಸಹಿಸಲಾರದ ಸಂಗತಿಯಾಗಿತ್ತು. ಅದೇ ವೇಳೆಗೆ ಡಾ|| ನಾಗರಾಜ್ ಮತ್ತು ಬಡ ಜನತೆಯ ಭೂ ವಿವಾದವು ಸಮಾಜ ವಿರೋಧಿ ವ್ಯಕ್ತಿಗಳಾದ ಈ ರಾಜಕಾರಣಿಗಳಿಗೆ ಸೂಕ್ತ ವೇದಿಕೆಯಾಗಿ ಲಕ್ಷ್ಮಣ್ ಅವರನ್ನು ಸಸ್ಪೆಂಡ್ ಮಾಡಿಸಿದ್ದಾರೆ. ಬಡ ಜನತೆಯಿಂದ ಬಂದ ಮನವಿ, ಒತ್ತಾಯಗಳನ್ನು ಧಿಕ್ಕರಿಸಿಯೂ ಲಕ್ಷ್ಮಣ್ ಅವರ ಪ್ರಾಮಾಣಿಕತೆಗೆ ಈ ಶಿಕ್ಷೆ ವಿಧಿಸಲಾಗಿದೆ. ಚಿಕ್ಕಮಗಳೂರು ಜಿಲ್ಲಾ ದ. ಸಂ. ಸವು ಲಕ್ಷ್ಮಣ್ ಅವರ ಅಮಾನತ್ತಿನ ರದ್ದಿಗೆ ತೀವ್ರವಾದ ಹೋರಾಟ ಪ್ರಾರಂಭಿಸಿದೆ ಎಂದು ತಿಳಿದು ಬಂದಿದೆ.

**

## ಪ್ರಜಾಪ್ರಭುತ್ವ ಉಳಿದಿದೆಯೋ ?

ಪ್ರಜಾಪ್ರಭುತ್ವವು ಭಾರತದ ಹಳ್ಳಿಗಳಲ್ಲಿ ಆಳವಾದ ಬೇರುಗಳನ್ನು ಬಿಡುತ್ತಿದೆ ಎಂಬ ಮಾತಿನಲ್ಲಿ ಅನುಮಾನವಿಲ್ಲವೆಂಬುದಕ್ಕೆ ಸ್ವಾರಸ್ಯಕರವಾದ ಘಟನೆಯೊಂದು ರಾಯಚೂರು ಜಿಲ್ಲೆಯ ಗಂಗಾವತಿಯಲ್ಲಿ ನಡೆದಿದೆ. ಕರ್ನಾಟಕದ ಮುಖ್ಯಮಂತ್ರಿ ಗುಂಡೂರಾಯರು ಇತ್ತೀಚಿಗೆ ಅಲ್ಲಿ ತಂಗಿದ್ದ ಅಲ್ಪ ಕಾಲದಲ್ಲಿ ಬಟ್ಟೆ ಹೊಲಿಯುವ ಯಂತ್ರಗಳನ್ನು ಬಡವರ್ಗದವರಿಗೆ ಹಂಚುವ ಕಾರ್ಯಕ್ರಮವೊಂದು ವ್ಯವಸ್ಥೆಯಾಗಿತ್ತು. ಅದ್ಯಾದ ಕೆಲವೇ ಕ್ಷಣಗಳಲ್ಲಿ ದಲಿತರ ಗುಂಪೊಂದು ವೇದಿಕೆಯನ್ನು ಆಕ್ರಮಿಸಿಕೊಂಡಿತು. ಅವರಲ್ಲಿ ವೀರಭದ್ರಪ್ಪ ಎಂಬ ವ್ಯಕ್ತಿ ಮೈಕನ್ನು ಹಿಡಿದು ಸರ್ಕಾರದ ಮತ್ತು ಮುಖ್ಯಮಂತ್ರಿಗಳ, ಗಂಗಾವತಿ, ದನಕಗಿರಿಯ ಶಾಸಕರ ಕಾರ್ಯ ವೈಖರಿಯನ್ನು ದಲಿತರ ಬಗ್ಗೆ ಅವರ ನಿರ್ಲಕ್ಷ್ಯವನ್ನು ಬಯಲಿಗೆಳೆದು ಸರ್ಕಾರವು ದಲಿತರಿಗೆ ಮೂಲಭೂತ ಅನುಕೂಲಗಳನ್ನು ಒದಗಿಸುವಲ್ಲಿ ವಿಫಲವಾಗಿದೆ ಎಂದು ಟೀಕಿಸಿ ಮಾತನಾಡಿ ಸಭೆಯಲ್ಲಿ ಅಚ್ಚರಿಯನ್ನು ಹುಟ್ಟಿಸಿದನೆಂದು ವರದಿಯಾಗಿದೆ.

**

# ಇವರಿಗೇನೂ ಅನ್ನಿಸುವುದಿಲ್ಲ

ಇವರಿಗೇನೂ ಅನ್ನಿಸುವುದಿಲ್ಲ
ತನ್ನವರ ಗೋಳಿನ ಕಥೆ ನಿತ್ಯ ಕೇಳಿ ಬರುತ್ತಿರುವಾಗ
ಹಿಡಿ ಅನ್ನಕ್ಕೆ, ಬೊಗಸೆ ನೀರಿಗೆ, ತುಂಡು ಜಮೀನಿ
ನ್ಯೈ-ಮನವನ್ನು ಒತ್ತೆ ಇಡುತ್ತಿರುವ
ತನ್ನವರ ಬೆತ್ತಲೆ-ಬದುಕು ಕಾಣಿಸುವುದಿಲ್ಲ
ಆಧುನಿಕತೆ ಆಡಂಬರದ ನೆರಳಲಿ ಇರುವ ಇವರಿಗೆ
ಅಲ್ಲೇ ಬಳಿಯಲ್ಲೇ ಮುರುಕು ಗುಡಿಸಿಲಿನಲ್ಲಿ
ಹಸಿದ ಹೊಟ್ಟೆಯಲಿ ಮುದುರಿ ಕೂತವನ ನೆನಪಾಗುವುದಿಲ್ಲ
ಧರ್ಮ-ಸಂಸ್ಕೃತಿಗಳ ಹೆಸರಿನಲಿ ಕುರುಡು ನಂಬಿಕೆ ಆಚರಣೆಗಳಿಗೆ
ಬದ್ಧರಾಗುವ ಅಂತಸ್ತಿನ ವ್ಯಾಮೋಹಕೆ ಕಟ್ಟು ಬೀಳುವ ಇವರಿಗೆ
ಹಸಿವು ನೋವು ನಿಂದನೆ ನಿರಾಸೆಗಳಿಂದ ನಿತ್ಯ ತತ್ತರಿಸಹೋಗುತ್ತಿರುವ
ತನ್ನವರ ಬದುಕಿನ ದುರಂತದ ಅರಿವು ಆಗುವುದೇ ಇಲ್ಲ
ಕರಿಸಿದ್ಧ ಕರೀಮನಾಗಿದ್ದು ಮಾದ ಮಹಮದನಾಗಿದ್ದು
ಏಕೆನ್ನುವ ನಗ್ನ ಸತ್ಯ ಇವರಿಗೆ ಗೋಚರಿಸುವುದಿಲ್ಲ
ನೀವೆಲ್ಲಾ "ಹಿಂದು" ನಾವೆಲ್ಲಾ ಮುಂದು ಎಂದು ಕೂಗುಹಾಕುತ್ತಿರುವ
ಧರ್ಮೋದ್ಧಾರಕರ ಹಿಂಬಾಲಿಸುವ ಮಂದ ಬುದ್ಧಿಯ
ಇವರು ಮುಂಗೈ ಮಣಿಕಟ್ಟಿಗೆ "ರಕ್ಷೆ" ಬಿಗಿಸಿಕೊಂಡು
ದಲಿತರು ತಾವಲ್ಲ ಎಂದು ಬೀಗುತ್ತಿರುತ್ತಾರೆ.

—ಪದ್ಮಾ ಕಲ್ಮಾಡಿ

## ಜೈಗುರುದೇವ ನಾಮದ ಪ್ರೇತಾತ್ಮಕ

ಕರ್ನಾಟಕ ರಸ್ತೆ, ಹಳ್ಳಿಗಳ ಗೋಡೆಗಳ ಮೇಲೆ ರೆಡ್-ಆಕ್ಸೈಡ್ ಬರಹಗಳ ಮೂಲಕ ಗುರುದೇವ ಎಂದು ಹೇಳಿಕೊಳ್ಳುವ ಮೂರ್ಖನೊಬ್ಬ ತಾನೇ ದೇವರೆಂದು ಘೋಷಿಸಿಕೊಳ್ಳುತ್ತಿದ್ದಾನೆ ಕರ್ನಾಟಕ ಜನರನ್ನು ಮುಠ್ಠಾಳರೆಂ ಭಾವಿಸಿರುವ ಮಧುರಾದ ಈ ಕತ್ತೆ ಭಡವನನ್ನು ಹೀಗೆ ಬಿಟ್ಟರೆ ನಿಮ್ಮೆಲ್ಲರ ಜನ್ಮದಾತ ನಾನೇ" ಎಂದು ಹೇಳಿಕೊಂಡು ಬಿಟ್ಟಾನು! ಈ ಗೂಬೆಯ ದರ್ಶನದಿಂದ ಪಾಪ ಪರಿಹಾರ ರೋಗರುಜಿನಗಳು ನಿವಾರಣೆಯಾಗುತ್ತದೆ. ಎಂದು ಇವನ ಎಂಜಲಿಗೆ ಕೈಯೊಡ್ಡಿರುವ ಏಜೆಂಟರುಗಳು ಬೊಗಳುತ್ತಿದ್ದಾರೆ. ಈ ರೆಡ್ ಆಕ್ಸೈಡ್ ದೇವನನ್ನು ಒದ್ದು ಓಡಿಸುವುದರ ಮೂಲಕ ಕರ್ನಾಟಕ ತನ್ನ ಆತ್ಮಗೌರವವನ್ನು ಉಳಿಸಿಕೊಳ್ಳಬೇಕಾಗಿದೆ.

"ಸು"

(ಚಿಕ್ಕಮಗಳೂರು ಪತ್ರಿಕೆಯಿಂದ)

## ಅಂಬೇಡ್ಕರವರನ್ನು ತಪ್ಪುತಪ್ಪಾಗಿ ಅರ್ಥೈಸುವುದರ ವಿರುದ್ಧ ಎಚ್ಚರ

ಮೈಸೂರಿನ ಮಾನಸಗಂಗೋತ್ರಿಯ ಮಾನವಿಕ ಸಭಾಂಗಣದಲ್ಲಿ 8-12-82 ರಂದು ಮೈಸೂರು ವಿಶ್ವವಿದ್ಯಾನಿಲಯದ ದಲಿತ ವಿದ್ಯಾರ್ಥಿ ಒಕ್ಕೂಟದ ಉದ್ಘಾಟನ ಸಮಾರಂಭ ಹಾಗೂ ಅಂಬೇಡ್ಕರ್ ಪುಣ್ಯತಿಥಿಯ ಸ್ಮರಣಾದಿನವನ್ನು ಆಚರಿಸಲಾಯಿತು. ಸಮಾರಂಭದ ಉದ್ಘಾಟಕರಾಗಿದ್ದ ಡಾ॥ ಸಂಜೀವಯ್ಯನವರು ಮಾತನಾಡಿ ದಲಿತ ಯುವಕರಲ್ಲಿ ಬೆಳೆಯುತ್ತಿರುವ 'ಸಂಘರ್ಷ'ದ ಮನೋಭಾವನನ್ನು ಗುರುತಿಸಿ ದಲಿತ ಯುವಕರು ಸಾಗಬೇಕಾಗಿರುವ ಕಡೆಗೆ ಗಮನ ಸೆಳೆದರು. ಇದೇ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿದ್ದ ಮೆಡಿಕಲ್ ಕಾಲೇಜಿನ ಅಧ್ಯಾಪಕರಾದ ಡಾ॥ ಗೋಪಾಲ್ ಅವರು ದಲಿತರ ಬಗ್ಗೆ ಬೆಳೆಯುತ್ತಿರುವ Intalerance ಕುರಿತು ವಿವರವಾಗಿ ಮಾತನಾಡಿದರು.

ದ. ಸಂ. ಸ. ದ ರಾಜ್ಯ ಸಂಚಾಲಕರಾದ ಬಿ. ಕೃಷ್ಣಪ್ಪನವರು ಮಾತನಾಡಿ ಅಂಬೇಡ್ಕರ್‌ರವರನ್ನು ತಪ್ಪುತಪ್ಪಾಗಿ ಅರ್ಥೈಸಿಕೊಳ್ಳುತ್ತಿರುವುದರ ವಿರುದ್ಧ ಎಚ್ಚರಿಸಿದರು. ಮತ್ತೊಬ್ಬ ಭಾಷಣಕಾ[ರರಾ]ಗಿದ್ದ ದೇವಯ್ಯ ಹರವೆಯವರು ಅಂಬೇಡ್ಕರ್‌ರ ಪ್ರಸ್ತುತೆಯತ್ತ ಗಮನ ಸೆಳೆದರು. ಸಮಾರಂ[ಭದ] ಅಧ್ಯಕ್ಷತೆಯನ್ನು ಮೈಸೂರು ವಿ. ವಿ. ಯ [ಕುಲ]ಸಚಿವರಾದ ಎನ್. ಆರ್. ವೆಂಕಟೇಶ ಅ[ವರು] ವಹಿಸಿದ್ದರು.

## ಪಂಚಮ ಪಾಕ್ಷಿಕ

ಪಂಚಮವು ಹದಿನೈದು ದಿನಗಳಿಗೊಮ್ಮೆ ಪ್ರ[ಕ]ಟವಾಗುತ್ತದೆ. ಬಡವನ ಒಡಲಾಳದ ದನಿಯಾ[ದ] ಪಂಚಮವನ್ನು ಬೆಳೆಸಬೇಕು. ಪತ್ರಿಕೆಗೆ ಚಂದಾ[ದಾ]ರವಾಗುವುದರ ಮೂಲಕ ಪತ್ರಿಕೆಯ ಪ್ರೋತ್ಸಾ[ಹ]ಸಿ ವಾರ್ಷಿಕ ಚಂದಾ 10 ರೂಗಳು ಮಾತ್ರ.

ವಿಳಾಸ ಪಂಚಮ
2514, ಎ
ಕೆ. ಜಿ. ಕೊಪ್ಪಲು
ಮೈಸೂರು-14

## ಅಪರಿಚಿತರ ಧಾಳಿಗೆ ಇಬ್ಬರು ಮಹಿಳೆಯರ ಬಲಿ

ಕಲ್ಲಿಕೋಟೆಗೆ ಸಮೀಪದ ಕುಟ್ಟಾಟಿ ಗ್ರಾಮದಲ್ಲಿ ಶನಿವಾರ ಮಧ್ಯರಾತ್ರಿ ಕೆಲವು ಅಪರಿಚಿ[ತ] ವ್ಯಕ್ತಿಗಳು ಗುಡಿಸಲೊಂದರ ಮೇಲೆ ಧಾಳಿ ಮಾ[ಡಿ] ಗುಡಿಸಲಿನಲ್ಲಿದ್ದ ದಲಿತ ಮಹಿಳೆಯರನ್ನು ಕೊಂದು ಪರಾರಿಯಾಗಿರುವ ಘಟನೆ ವರದಿಯಾಗಿದೆ. ಸತ್ತ ಮಹಿಳೆಯರ ತಾಯಿ ಮತ್ತು ಆಕೆಯ 17 ವರ್ಷ[ದ] ಮಗಳೆಂದು ಹೇಳಲಾಗಿದೆ. ತೀವ್ರವಾಗಿ ಗಾಯ[ಗೊಂಡಿರುವ] ತಂದೆಯನ್ನು ಆಸ್ಪತ್ರೆಗೆ ದಾಖಲ[ು] ಮಾಡಲಾಗಿದೆ. ಈ ದಾರುಣ ಹತ್ಯೆಗೆ ಕಾರ[ಣ]ವೇನೆಂದು ತಿಳಿದುಬಂದಿಲ್ಲ.

## ಗ್ರಾಮಸ್ಥರಿಂದ ಹಲ್ಲೆ ಗರ್ಭಿಣಿ ಮಹಿಳೆಯ ಸಾವು

ಗ್ರಾಮಸ್ಥರು ಹೇಳಿದ ಹೊಲಸು ಕೆಲಸಗಳ[ನ್ನು] ಮಾಡಲು ನಿರಾಕರಿಸಿದ ಸ್ವಾಭಿಮಾನಿ ದ[ಲಿತ] ಮಹಿಳೆಯ ಮೇಲೆ ರಾಮಪುರ ಕರ್ಕಬಾನ [ಪೊ]ಲೀಸ್ ಠಾಣಾ ವ್ಯಾಪ್ತಿಗೆ ಸೇರುವ ಸಹೋದಪ[ುರ] ಎಂಬ ಗ್ರಾಮದಲ್ಲಿ ಡಿ. 9ನೇ ಗುರುವಾರ ಗ್ರಾಮ[ದ] ಕೆಲವು ದುಷ್ಟರು ಹಲ್ಲೆ ನಡೆಸಿದ ಪರಿಣಾಮವ[ಾಗಿ] ತೀವ್ರವಾಗಿ ನೋವನ್ನನುಭವಿಸಿದ ಈಕೆ ಗ[ರ್ಭ]ವತಿಯಾಗಿದ್ದು ಮಗುವೊಂದನ್ನು ಹೆತ್ತು [ಸತ್ತು]ಪಟ್ಟ ದಾರುಣ ಘಟನೆ ವರದಿಯಾಗಿದೆ.

# ಶಾಲು ಮತ್ತು ದಂಡ

1968ರ ಒಂದು ಚಳಿಗಾಲದ ಅಮವಾಸ್ಯೆ ರಾತ್ರಿ 9 ಗಂಟೆ ಸಮಯ. ಹೊಲಗೇರಿಯ ಜನ ಕೂಲಿನಾಲಿ ಮಾಡಿಕೊಂಡು ಬಂದು ಊಟದ ನಂತರ ಮಲಗಿದ್ದರು 9 ಗಂಟೆಗೆ ಕೇರಿಗೆ ಕೇರಿಯೆ ಸ್ಮಶಾನ ಮೌನ ತಾಳಿತ್ತು. ಭಯಾನಕ ಕತ್ತಲಿನಲ್ಲಿ ಒಬ್ಬರ ಮುಖ ಒಬ್ಬರಿಗೆ ಕಾಣುತ್ತಿರಲಿಲ್ಲ. ಮೇಗಳಗೇರಿ ನಿಂಗನ ಮಗಳನ್ನು ಕೆಳಗಿನ ಕೇರಿ ಹನುಮನ ಮಗನಿಗೆ ಕೊಟ್ಟು ಮದುವೆ ಮಾಡಿದರು. ಹನುಮನ ಮಗ ತುಂಬಾ ಕುಡುಕ ರಾತ್ರಿ 10 ಗಂಟೆಗೊ 11 ಗಂಟೆಗೊ ಬಿಡದಿಯಿಂದ ಕುಡಿದು ಚಿತ್ತಾಗಿ ಮನೆಗೆ ಬರುವ ವಾಡಿಕೆ. ನಿಂಗನ ಮಗಳು ಹೇಗಿದ್ದರೂ ಗಂಡ ಬರುವುದು ರಾತ್ರಿ 10ಕ್ಕೆಂದು ತಾಯಿಯ ಮನೆಯಲ್ಲಿ ಇದ್ದು ಗಂಡ ಬಂದ ಮೇಲೆ ಮನೆಗೆ ಹೋಗುತ್ತಿದ್ದಳು.

ಅಂದು ರಾತ್ರಿ ಈಕೆಯ ಗಂಡ ರಾತ್ರಿ 10 ಗಂಟೆಯಾದರೂ ಬರಲೇ ಇಲ್ಲ. ಆಕೆ ಒಬ್ಬಳೇ ಕೆಳಗಿನ ಕೇರಿಯ ಆಕೆಯ ಮನೆಯತ್ತ ನಡೆದಳು. ಮೇರಿ ಬಿಟ್ಟು ಮುಂದೆ ಬಂದರೆ ಚಿಣ್ಣನ ಮನೆ, ಸರ್ಕಾರಿ ಸಹಾಯದೊಡನೆ ಸ್ವಂತ ಬಂಡವಾಳ ಹಾಕಿ ಚೆನ್ನಾಗಿಯೇ ಕಟ್ಟಿಸಿದ್ದ. ಪಕ್ಕದಲ್ಲಿ ಪಾಪಾಸು ಕಳ್ಳಿಬೇಲಿ. ಕತ್ತಲೆ 'ಗೌ' ಎನ್ನುವಾಗ ನಿಂಗನ ಮಗಳಿಗೆ ಭಯ ಜಾಸ್ತಿಯಾಯಿತು. ಚಿಣ್ಣನ ಮನೆ ಬಳಿ ಬಂದಳು. ಪಡಸಾಲೆಯತ್ತ ಕಣ್ಣು ಹರಿಸಿದಳು. ಯಾರದೋ ದೇಹದ ಅಲುಗಾಟ. ಇವಳಿಗೆ ಎದೆ ಝಲ್ಲೆಂದಿತು ! ಧೈರ್ಯ ಮಾಡಿಕೊಂಡೆ ಹತ್ತಿರ ಹತ್ತಿರ ಹೋದಳು. ಮುತ್ತಸ್ಟು ಹಿಂದು ಮುಂದಾದ ದೇಹ, ಬಿಳಿಬಟ್ಟೆ ನೋಡಿ 'ಯಾರದು' ಎಂದಳು. ಇದ್ದಕ್ಕಿದ್ದಂತೆ ಪಡಸಾಲೆ ನೆಗೆದು ವಾಪಾಸು ಕಳ್ಳಿ ಬೇಲಿ ನೆಗೆದು ಯಾರೋ ಓಡಿದರು. ಆ ದೃಶ್ಯ ನಿಜಕ್ಕೂ ಭಯಂಕರವಾದುದರಿಂದ ಇವಳಿಗೆ ಬಾಯಿ ಒಣಗಿತು ಎದೆ ನಡುಗುವುದು ಹೆಚ್ಚಿತು ಮೈಯೆಲ್ಲ ಜಲ ಜಲನೆ ಬೆವರಿ ಚೀರುತ್ತಾ ಕೆಳಕ್ಕೆ ಕುಸಿದಳು.

ಈ ವಿಚಿತ್ರವಾದ 'ಚೀರುವಿಕೆ' ಊರಿಗೆಲ್ಲ ಕೇಳಿಸಿ ಎಲ್ಲರಿಗೂ ಎದೆ ನಡುಗಿಸಿತು. 'ಯಾರದು ಯಾರದು' ಎಂದು ಸ್ವಲ್ಪ ಸಮಯದಲ್ಲೆ ಹೊಲಗೇರಿಯ ಗಂಡಸರು ಹೆಂಗಸರು ಮುತ್ತಿಕೊಂಡರು. ದೀಪ ಹಿಡಿದು ನೋಡಿದರೆ ನಿಂಗನ ಮಗಳು ರಂಗಿ. ತಕ್ಷಣ ಉತ್ತಮರ ಕೇರಿಯಲ್ಲಿದ್ದ ಈರಾಚಾರಿ ಕಟ್ಟಿಸಿಕೊಂಡು ಬಂದು, ಮಂತ್ರ ಹೊಡಿಸಿ ಬಲ ತೋಳಿಗೆ ಯಂತ್ರವನ್ನು ಬಿಗಿಸಿದರು. ರತ್ನೀರು ಮುಖಕ್ಕೆ ಎರಚಿದಾಗ ಪಟ ಪಟನೆ ಕಣ್ಣು ಬಿಟ್ಟು ನೋಡಿದಳು ಬರೀ ಜನ. ಊರಿನ ಹಿರೀಕರು ಅವಳಿಗಾದ ಅನುಭವವನ್ನು ಕೇಳಿದರು. ಕೆಲವರಿಗೆ ಮೊನ್ನೆ ತಾನೆ ಊರಿನ ಛೇರ್‌ಮನ್ ತನ್ನ ಹೆಂಡತಿಯನ್ನು ಕೆಡಸಿದ ಅಪಮಾನದಿಂದ ನೇಣು ಹಾಕಿಕೊಂಡು ಸತ್ತುಹೋದ ಕುಂಬಾರರ ಚಿಕ್ಕಣ್ಣನೇನಾದರೂ ದೆವ್ವ ಆಗಿರಬಹುದೆಂದು ಶಂಕೆ ಮೂಡಿತು. ಕೆಲವರಿಗೆ ಊರಿನ ಕಳ್ಳ ಇರಬೇಕು. ಇನ್ನೂ ಕೆಲವರಿಗೆ ಚಿಣ್ಣನ ಮನೇಲಿ ಏನಿದೆ ಎಂದು ಕಳ್ಳ ಬರುತ್ತಾನೆಂದು ಅನುಮಾನ. ಚಿಣ್ಣನ ಮಗಳು ಮಾದೇವಿ ಹದಿಹರೆಯದ ಚೆಲುವೆ. ಆಕೆ ಮೇಲೆ ಗುಮಾನಿ ಬಂದರೂ ಜನ ಸರಿಯಾಗಿ ಯಾವುದನ್ನು ನಂಬಲಿಲ್ಲ. ಅಷ್ಟರಲ್ಲಿ 11 ಘಂಟೆ ಮೀರಿತು. ಬಿಡದಿ ದಾರಿಯಿಂದ ಚಿಣ್ಣ ಮತ್ತು ರಂಗಿಯ ಗಂಡ ಬೋರ ಇಬ್ಬರೂ ಕುಡಿದು 'ಸಾರಂಗದರ' ನಾಟಕದ ಹಾಡುಗಳು ಹೇಳುತ್ತಾ ಬಂದು ನೋಡಿದಾಗ ಅವರಿಗೂ ನಿಷ ಇಳಿಯಿತು.

## ಅನುಭವದ ಗಣಿಯಿಂದ

ಚಿಣ್ಣ ಬಾಯಿಗೆ ಬಂದಂತೆ ಕೆಟ್ಟ ಕೆಟ್ಟದಾಗಿ ಬೈಯಲಾರಂಭಿಸಿದ. ಚಿಣ್ಣನ ಹೆಂಡದಿ ಚಿಕ್ಕೇರಿ ಕೂಡ 'ಗಲ್ಲೆ' 'ಮಾಸು' ಎಂದು ದನಿಕೊಡಿಸಿಳು.

ಸಮಾಧಾನವಾದ ರಂಗಿ ವಿವರವಾಗಿ ತಿಳಿಸಿದೊಡನೆ ಬೋರ ಮತ್ತು ಚಿಣ್ಣ ಇಬ್ಬರೂ ಸೇರಿ ಪಾಪಾಸುಕಳ್ಳಿ ಬಳಿಯಿಂದ ಹಿತ್ತಲಿಗೆ ಹೋಗುವ ಜಾಗದತ್ತ ದೀಪ ಹಿಡಿದುಕೊಂಡು ನೋಡಿದರು. ಪಾಪಸುಕಳ್ಳಿಯ ಮೇಲೆ ಬೆಳ್ಳಗೆ ಕಂಡಿತು. ಯಾವುನೋ ಅವ್ನ ಬೋಳಿಮಗ ನಿಂತಿರೋದು ಎಂದು ಚಿಣ್ಣ ಅಬ್ಬರಿಸಿದ. ಮತ್ತೆ ಜನಸೇರಿ ಬಿಟ್ಟರು. ಆದರೆ ಅಲ್ಲಿ ಯಾರು ನಿಂತಿರಲಿಲ್ಲ. ಪಾಪಾಸು ಕಳ್ಳಿಯ ಮೇಲೆ ರೇಶಿಮೆ ಶಾಲೊಂದು ಸಿಕ್ಕಿಕೊಂಡಿತ್ತು. ಹಾಗೂ ಬಿಳಿ ಟೆರಿಕಾಟ್ ಬಟ್ಟೆಯ ಚೂರು ಸಿಕ್ಕಿತು.

ಬೋರ, ಚಿಣ್ಣ ಅದನ್ನು ಎತ್ತಿಕೊಂಡು ಹೊಲಗೇರಿಯ ಯಜಮಾನರಿಗೆ ಒಪ್ಪಿಸಿದರು. ಅದು ಯಾರ ಶಾಲೆಂದು ಬೋರ, ಚಿಣ್ಣ, ಮತ್ತು ಊರಿನ ಯಜಮಾನರಿಗೆ ಗೊತ್ತಾಯಿತು. ಗುಟ್ಟಾಗಿ ಇದ್ದರೂ ರಾತ್ರಿಯೆ ಗುಲ್ಲೆದ್ದಿತು. ಅದು ಊರಿನ ಛೇರ್‌ಮನ್ ಅಣ್ಣಯ್ಯಪ್ಪನದೆಂದು.'

ಊರಿನ ಅನೇಕ ಹೆಣ್ಣುಮಕ್ಕಳನ್ನು ಕೆಡಿಸಿದ್ದ ಅಣ್ಣಯ್ಯಪ್ಪನ ಜಮೀನಿಗೆ ಅಂದು ಚಿಣ್ಣನ ಹೆಂಡತಿ ಹಾಗೂ ಮಗಳು ಮಾದೇವಿ ಕೂಲಿಗೆ ಹೋಗಿದ್ದರು ಆಕೆ ಮೇಲೆ ಅಲ್ಲೆ ಕಣ್ಣು/ಹಾಕಿದ್ದ. ಆದ್ದರಿಂದಲೆ ಬೋರ ಮತ್ತು ಚಿಣ್ಣನಿಗೆ ಹೆಂಡ ಕುಡಿಯಲು ಕಾಸು ಕೊಟ್ಟು ಬಿಡದಿಗೆ ಕಳಿಸಿದ್ದ.

ಬೆಳಿಗ್ಗೆ 6 ಗಂಟೆ ಸಮಯ ಛೇರ್‌ಮನ್ ಅಣ್ಣಯ್ಯಪ್ಪ ಕೆಲವರ ಜೊತೆಯಲ್ಲಿ ಹೊಲಗೇರಿಗೆ ಬಂದು 'ಅಮ್ಮ, ಅಕ್ಕ' ಎಂದು ಬೈಯುತ್ತಾ "ಯಾರೋ ನೆನ್ನೆ ಶಾಲು ಕಳವು ಮಾಡಿದ್ದಾರೆ" ಎಂದು ಸುದ್ದಿ ಹರಡಿದ. ಶಾಲು ಸಿಕ್ಕಿದ ವಿಚಾರ ತಿಳಿದು ಅಂದು ರಾತ್ರಿ ಹೊಲಗೇರಿಯಲ್ಲೆ ನ್ಯಾಯ ಏರ್ಪಡಿಸಿ "ಶಾಲನ್ನು ಚಿಣ್ಣ ಮತ್ತು ಬೋರ ಕಳವು ಮಾಡಿದ್ದಾರೆಂದು ತಲಾ 25 ರೂ. ದಂಡ ವಿಧಿಸಿದನು. ಈ ಕ್ರೂರ ಅಣ್ಣಯ್ಯಪ್ಪನ ಮಾತಿಗೆ ಮರುಮಾತು ಆಡುವವರು ಊರಿನಲ್ಲಿ ಯಾರು ಇರಲಿಲ್ಲ. ಅಂದ ಮೇಲೆ ಮುಗ್ಧ ದಲಿತರು ಅವನ ಮೇಲೆ ಕ್ರಮ ಕೈಗೊಳ್ಳಲು ಪ್ರತಿನಿತ್ಯ ಅವನ ಜಮೀನಿನಲ್ಲೆ ಕೂಲಿ ಮಾಡಿ ಹೊಟ್ಟೆ ಸಾಕಬೇಕಾದುದರಿಂದ ಏನೂ ಮಾಡಲಾಗದೆ ಸೋತರು.

—ಬಾನಂದೂರು ಕೆಂಪಯ್ಯ

## ಕಾನ್ಪುರದ ಬಳಿ ನಾಲ್ವರು ದಲಿತರ ಕಗ್ಗೊಲೆ

'ಕಾರ್ತೀಕ ಪೂರ್ಣಿಮೆ' ಯ ಹಬ್ಬದ ಪೂಜೆಯಲ್ಲಿ ತೊಡಗಿದ್ದ ಕಾನ್ಪುರದ ಬಳಿಯ ಎಟವಾ ಜಿಲ್ಲೆಯ ಪೂಫಾನ್ ಗ್ರಾಮದ ದಲಿತರ ಮೇಲೆ ನವೆಂಬರ್ 30ರ ರಾತ್ರಿ ನಾಡಶಸ್ತ್ರಗಳಿಂದ ಸಜ್ಜಿತರಾಗಿದ್ದ ಗುಂಪೊಂದು ಧಾಳಿ ನಡೆಸಿ ನಾಲ್ವರು ದಲಿತರನ್ನು ಕೊಂದಿರುವುದಾಗಿ ತಿಳಿದು ಬಂದಿದೆ. ಕೊಲೆಯಾದ ನಾಲ್ವರು ದಲಿತರಲ್ಲಿ ಒಬ್ಬ ಮಹಿಳೆಯೂ ಸೇರಿದ್ದು, ಆರು ಮಂದಿ ಗಾಯಗೊಂಡಿದ್ದಾರೆ. ಗ್ರಾಮ ಪ್ರಧಾನ ಚುನಾವಣೆಯಲ್ಲಿನ ಸ್ಪರ್ಧೆಗಳು ಈ ಹತ್ಯೆಗೆ ಕಾರಣವೆಂದು ಶಂಕಿಸಲಾಗಿದೆ. ಈವರೆಗೆ ನಾಲ್ವರನ್ನು ಬಂಧಿಸಿದ್ದು ತನಿಖೆ ಮುಂದುವರಿಯುತ್ತಿದೆ.

# ಹಗಲು ದರೋಡೆಗೆ ಶಾಮೀಲಾದ ಸರ್ಕಾ

ದೇವಿಕಾರಾಣಿಯಂಥವರ ದುಷ್ಟಜಾಣತನ ಕಾನೂನನ್ನು ತನ್ನ ಮಡಿಲೊಳಗೆ ಹಾಕಿಕೊಂಡು ಬಡಕಾರ್ಮಿಕರ ಎದೆಗೆ ಚಾಕು ಹಾಕುವ ನೈಪುಣ್ಯತೆಗೆ ಇದೊಂದು ಜೀವಂತ ಉದಾಹರಣೆ. ಯಾಕಂದರೆ ಈ ಬೆಳೆ **plantation** ಗೆ ಒಳಪಟ್ಟಿದ್ದರೆ‌ಇಲ್ಲಿ ಕೂಲಿ ಮಾಡುವ ಕಾರ್ಮಿಕರಿಗೆ **plantation act** ಪ್ರಕಾರ ಹೆಚ್ಚಿನ ಕೂಲಿಯನ್ನು ಕೊಡಬೇಕಾಗಿತ್ತು. ಜೊತೆಗೆ ಶೇಕಡ 10ರಷ್ಟು ಆದಾಯ ತೆರಿಗೆಯನ್ನು ಕಟ್ಟಬೇಕಾಗಿತ್ತು. ಇದನ್ನು ತಪ್ಪಿಸಿ ಕೊಳ್ಳುವ ಉಪಾಯ ಜೊತೆಗೆ ಮತ್ತೆ ಯಾರಾದರು ಪುನಗನ್ನು ಹೆಚ್ಚಿನ ಪ್ರಮಾಣದಲ್ಲಿ ಬೆಳೆದು ಪ್ರತಿಸ್ಪರ್ಧಿಯಾಗಬಾರದು ಅನ್ನುವ ಕಾರಣಕ್ಕಾಗಿ ಅದೇ ಅಧ್ಯಾಯದ ಅಂದರೆ ಕರ್ನಾಟಕ ಭೂಸುಧಾರಣೆ 10 (2] ರ ಸೆಕ್ಷನ ಪ್ರಕಾರ 1974ರಿಂದ ಈಚೆಗೆ ಈ ಬೆಳೆ ಬೆಳೆದರೂ ಅದು ಭೂಮಿತಿಗೆ ಒಳಪಡುತ್ತದೆ. ಹೀಗಾಗಿ ಯಾರೂ ಇವರ ಪ್ರತಿಸ್ಪರ್ಧಿಯಾಗಲು ಸಾಧ್ಯವಿಲ್ಲ. ಕರ್ನಾಟಕ ಸರ್ಕಾರ–ಮಾರುಕಟ್ಟೆಯ ಉದ್ದೇಶದಿಂದಲೇ ಈ ಬೆಳೆಯನ್ನು ಬೆಳೆಸುತ್ತಿದ್ದರೂ ಕೂಡ **plantation act** ಗೆ ಅಥವಾ ಭೂಮಿತಿಗೆ ಇದನ್ನು ಸೇರಿಸಿರುವುದು ಹಗಲು ದರೋಡೆಗೆ ರಾಜಾರೋಷವಾಗಿ ಶಾಮೀಲಾಗುತ್ತಿದೆ ಅನ್ನುವುದು ಸ್ಪಷ್ಟವಾಗುತ್ತದೆ.

### ಕೈಗಾರೀಕರಣಗೊಂಡ ವ್ಯವಸಾಯಕ್ಕೆ ಶುಕ್ರದೆಸೆ

ಹೀಗೆ ಹೆಚ್ಚಿನ ಭೂ ಹಿಡುವಳಿಗಳನ್ನು ಇಟ್ಟುಕೊಳ್ಳಲು ಹಲವಾರು ರೀತಿಯ ರಹದಾರಿಗಳನ್ನು ಕಲ್ಪಿಸಿಕೊಂಡಿರುವ ಸರ್ಕಾರ **plantation** ಬೆಳೆಗೆ ಭೂಮಿತಿಯನ್ನು ಹೇರದೆ ಇರುವುದರ ಬಗ್ಗೆ ಸರ್ಕಾರಕ್ಕೆ ಇರುವ ಧೋರಣೆಯನ್ನು ಕುರಿತು ಕರ್ನಾಟಕ ರೈತಸಂಗ ಹೇಳುವುದಾಗಲಿ 1972 ಮೈಸೂರಿನಲ್ಲಿ ಈ ಬಗ್ಗೆ ಇಟ್ಟ ಸೆಮಿನಾರ್‌ನಲ್ಲಿ ಜವರೇಗೌಡರು ಹೇಳುವುದಾಗಲಿ ಸರಿಎನಿಸುತ್ತದೆ. ಏನೆಂದರೆ ಈ ಸರ್ಕಾರ ಕೈಗಾರಿಕೋದ್ಯಮಿಗಳ ಹಿತವನ್ನು ಕಾಪಾಡುವ ಮೂಲೋದ್ದೇಶ ಇಟ್ಟುಕೊಂಡಿರುವುದರಿಂದ ವ್ಯವಸಾಯದ ಕ್ಷೇತ್ರದಲ್ಲಿ ಮಾತ್ರ ಭೂಮಿತಿ ಹಾಗೂ ಆದಾಯದ ಮಿತಿಯನ್ನು ತಂದಿತೇ ಹೊರತಾಗಿ ಕೈಗಾರಿಕಾ ಕ್ಷೇತ್ರದಲ್ಲಿ ಯಾವುದೇ ರೀತಿಯನ್ನು ತರ ಲಿಲ್ಲ–ಅನ್ನುವ ಮಾತು ನಿಜವಾದರೂ ವ್ಯವಸಾಯ ಕ್ಷೇತ್ರದಲ್ಲೂ ಮಿತಿಗೆ ಒಳಗಾದ ಭೂಮಿ ಇರುವುದನ್ನು ಗಮನಿಸಬೇಕಾಗುತ್ತದೆ. ಮೊದಲಿನಿಂದಲೂ ಈ ಮಲತಾಯಿ ಧೋರಣೆ ಇದ್ದದ್ದೇ ವ್ಯವಸಾಯ ಕ್ಷೇತ್ರದಲ್ಲಿ. ಕೈಗಾರಿಕಕರಣಗೊಂಡ ಮಾರುಕಟ್ಟೆಯ ದೃಷ್ಟಿಯಿಂದಲೇ ಬೆಳೆಯುವ ಬೆಳೆಗಳಿಗೂ ಮಿತಿ ಹಾಕದಿರುವುದನ್ನು ಕಂಡಾಗ ಕೈಗಾರಿಕೀ ಕರಣ ಯಾವುದೇ ಕ್ಷೇತ್ರದಲ್ಲಿಯೇ ಆಗಲಿ ಅದಕ್ಕೆ ಮಿತಿ ಹಾಕದೆ ದೊಡ್ಡ ಶ್ರೀಮಂತರನ್ನು ಬೆಳೆಸುವ ಉದ್ದೇಶ ಈ ಸರ್ಕಾರಕ್ಕಿರುವುದು ಸ್ಪಷ್ಟವಾಗುತ್ತದೆ. ಮಿತಿಗೆ ಸಿಕ್ಕದ **plantation,** ಕಬ್ಬು ಸರ್ಕಾರಿ ಜಮೀನುಗಳು, ಸಹಕಾರಿ ಜಮೀನು ಮುಂತಾದುವು ಹೆಚ್ಚಿನ ಸಂಖ್ಯೆಯಲ್ಲಿದ್ದು ಭೂಮಿತಿಗೆ ಸಿಕ್ಕಿದ್ದು ಬೆರಳೆಣಿಕೆಯಷ್ಟು ಭೂಮಿ ಮಾತ್ರ.

### ಬೆಟ್ಟ ಅಗೆದು ಇಲಿ ಹಿಡಿದರು

ಭೂ ಹಿಡುವಳಿಗೆ ಮಿತಿ ಹಾಕಿದ ನಂತರ ಇದುವರೆಗೆ ಅಂದರೆ 1982ರವರೆಗೆ 2,69,232 ಎಕರೆ

**ಭೂಸುಧಾರಣಾ ಚರಿತ್ರೆ–8**

**ಕ್ಷೀರಸಾಗರ**

ಭೂಮಿಯನ್ನು ಮಾತ್ರ ಹೆಚ್ಚುವರಿ ಭೂಮಿ ಎಂದು ಗುರ್ತಿಸಲಾಗಿದೆ. ಇದರಲ್ಲಿ ಬರೀ 89 ಸಾವಿರ ಎಕರೆಗಳನ್ನು ಮಾತ್ರ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿದೆ. ಉಳಿದದ್ದು ಇನ್ನೂ ತಕರಾರಿನಲ್ಲೇ ಇದೆ. ಇದರಲ್ಲೂ ಹಂಚಿಕೆಯಾಗಿರುವುದು 60 ಸಾವಿರ ಎಕರೆಗಳು ಮಾತ್ರ ಇದರಲ್ಲಿ 32 ಸಾವಿರ ಎಕರೆ ಜಮೀನನ್ನು ಹರಿಜನರಿಗೂ ಒಂದು ಸಾವಿರ ಎಕರೆ ಜಮೀನನ್ನು ಗಿರಿಜನರಿಗೂ ಹಂಚಲಾಗಿದ್ದು ಉಳಿದದ್ದನ್ನು ಇತರರಿಗೆ ಹಂಚಲಾಗಿದೆ. ಈ ಹಂಚಿಕೆಯಲ್ಲಿ ಲಾಭ ಪಡೆದ ಒಟ್ಟು ಅರ್ಜಿದಾರರ ಸಂಖ್ಯೆ 12 ಸಾವಿರ. ರಾಜ್ಯದಲ್ಲಿ 1971ರಲ್ಲಿ ಭೂಹೀನ ಕೃಷಿಕಾರ್ಮಿಕರ ಸಂಖ್ಯೆ 67 ಲಕ್ಷ ಇತ್ತು ಎಂದು ಸರಕಾರವೇ ಹೇಳಿದುದನ್ನು ಗಮನಿಸಿದರೆಈ ಸಂಖ್ಯೆ ಹೇಗೆ ಭೂಹೀನ ಕೃಷಿಕರ ಉಸಿರಾಗಿಲ್ಲ ಅನ್ನುವುದು ಗೊತ್ತಾಗುತ್ತದೆ. ಸರ್ಕಾರ ತಂದ ಭೂಮಿತಿಯ ಈ ಪ್ರಯತ್ನ ಬೆಟ್ಟ ಅಗೆದಿದ್ದು ಅಗಾಧವಾಗಿ ಕಂಡರೂ ಹಿಡಿದಿದ್ದು ಮಾತ್ರ ಒಂದು ಸಣ್ಣ ಸೊಂಡಿಲಿ.

### ದಂಡವಾಗುತ್ತಿರುವ ದಂಡನೆಯ ಕಾನೂನು

ಕರ್ನಾಟಕೆ ಭೂಸುದಾರಣೆಯಲ್ಲಿ ದಂಡ ಸಂ ಅಂತ ಕೂಡ ಒಂದು ಅಧ್ಯಾಯ ಇದೆ ಅಂ ಆಶ್ಚರ್ಯವಾಗುತ್ತದೆ. ಏಕೆಂದರೆ ದಂಡ ಸಂ ಯನ್ನು ಕಾರ್ಯರೂಪಕ್ಕೆ ತಂದ ಉದಾಹರಣೆ ಕಾಣಿಸುತ್ತಿಲ್ಲ. ಹಾಗೇನಾದರೂ ಕಾರ್ಯರೂ ತಂದರೆ ಬಹುಶಃ ಟ್ರಿಬುನಲ್‌ಗಳಿಗೆ ಇದು ಲ್ಲಿಸಿರುವ 8 ಲಕ್ಷ ಅರ್ಜಿಗಳಲ್ಲಿ ಶೇಕಡ 99 ಭೂಮಾಲೀಕರು ಶಿಕ್ಷೆಗೆ ಒಳಗಾಗಬೇಕಾಗು ಆದ್ದರಿಂದ ಇದು ಕಾಗದಲ್ಲಿ ಮಾತ್ರವೇ ಉ ಕೊಂಡ ಕಾಗದ ಸಂಹಿತೆ ಅಷ್ಟೆ. 10 ಅ ಯದ 125ನೇ ಸೆಕ್ಷನ ದಂಡಸಂಹಿತೆಯ ಕ ಶ್ಯಾಂಪಲ್ಲುಗಳನ್ನು ತೋರಿಸಿದತೆ ಇದೊಂದು ದದ ಹುಲಿ ಅನ್ನುವುದು ಇನ್ನಷ್ಟು ಮನದಟ ಬಹುದು.

### ಕರ್ನಾಟಕೆ ಭೂಸುಧಾರಣೆಯ 10ನೇ ಅಧ್ಯಾಯದ 12ನೇ ಸೆಕ್ಷನ್ ಮೇರಿಗೆ

1 12ನೇ ಸೆಕ್ಷ ಭೂಮಾಲಿಕ ಗೇಣಿ ನಿಂದ ಗುತ್ತಿಗೆ **Rent** ಒಂದನ್ನು ಬಿ ಲೆವಿ, ಸೆಸ್ ಮತ್ತು ತೆರಿಗೆ ಇರುವುದ ವಸೂಲು ಮಾಡುವಂತಿಲ್ಲ. ಹೀಗೆ ಮ ದ್ದಾದರೆ ಭೂಮಾಲಿಕ 1000ರೂ ದಂಡ ತರಬೇಕು

2 33ನೇ ಸೆಕ್ಷ ಪ್ರಕಾರ ಗೇಣಿದಾರ ಗುತ್ತಿಗೆ ಭತ್ಯ ಪಡೆದ ಭೂಮಾಲಿಕ ಬಗ್ಗೆ ಅವನಿಗೆ ರಸೀತಿ ಕೊಡಬೇ ಹಾಗೆ ರಸೀತಿ ಕೊಡದ ಭೂಮಾಲಿಕ 5 ರೂಗಳ ದಂಡ ತೆರಬೇಕಾಗುತ್ತದೆ.

4 41ನೇ ಸೆಕ್ಷನ್ ಪ್ರಕಾರ ಗೇಣಿ ಉಳುತ್ತಿದ್ದ ಭೂಮಿಯಾಗಲಿ ಬೆಳೆ ಗಲಿ ಅಲ್ಲಿರುವ ಮನೆಯನ್ನಾಗಲಿ ಮಾಲಿಕ ತಹಶಿಲ್ದಾರರ ಅಪ್ಪಣೆ ಇಲ್ಲದೆ ವಶಪ ಕೊಂಡರೆ 1000 ರೂಗಳ ದಂಡ ತೆರಬೇ ಗುತ್ತದೆ.

ಇಂಥ ಕೆಲಸಗಳನ್ನು ತಿರ್ಮಾನ ಮಾಡಿ ವಿಧಿಸುವವರು ಮ್ಯಾಜಿಸ್ಟ್ರೇಟರು. ಆದರೆ ಶಿಲ್ದಾರರೂ ಕೂಡ 66 A ಸೆಕ್ಷನಲ್ಲಿ ಸೂಚಿಸ ದಂಡನೆಯನ್ನು ಕೊಡಬಹುದು. ಅದೇನೆಂದರೆ ಮಿತಿಯನ್ನು ಮೀರಿದ ಪ್ರತಿಯೊಬ್ಬ ಭೂಮಾಲಿಕ

(8ನೇ ಪುಟಕ್ಕೆ)

**ಚೇತನ ಕನ್ನಡ ಸಂಘ**

ಚಾಮರಾಜ ಜೋಡಿ ರಸ್ತೆ, ಮೈಸೂರು–೫೭೦ ೦೦೪.

# ಪ್ರಕಟಣೆ

'ಪಂಚಮ' ಪತ್ರಿಕೆಯ ಪ್ರಸಾರವನ್ನು ಬೆಳೆಸುವ ಆಶಯದಿಂದ ಚೇತನ ಕನ್ನಡ ಸಂಘವು ಅದರ ರಾಜ್ಯವ್ಯಾಪಿ ವಿತರಣೆಯ ಹೊಣೆಯನ್ನು ಹೊತ್ತುಕೊಂಡಿದೆ.

ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿ ಏಜೆಂಟರನ್ನು ನೇಮಿಸಲಾಗುತ್ತಿದೆ. ಪತ್ರಿಕೆಯ ಬೆಳವಣಿಗೆಯಲ್ಲಿ ಆಸಕ್ತಿಯುಳ್ಳವರು ಏಜೆಂಟರಾಗಬೇಕೆಂದು ಈ ಮೂಲಕ ಆಹ್ವಾನಿಸುತ್ತಿದ್ದೇವೆ.

## ಏಜೆನ್ಸಿಗೆ ಸಂಬಂಧಿಸಿದ ನಿಯಮಗಳು ಕೆಳಕಂಡಂತಿವೆ :

೧. ಪತ್ರಿಕೆಗಳನ್ನು ರವಾನಿಸುವ ಖರ್ಚನ್ನು ವಿತರಕರೇ ವಹಿಸುತ್ತಾರೆ.

೨. ಏಜೆಂಟರು ಪ್ರತಿ ಒಂದಕ್ಕೆ ೧ ರೂ. ಠೇವಣಿ ಇಡತಕ್ಕದ್ದು. ಏಜನ್ಸಿ ರದ್ದಾದಾಗ, ಯಾವುದೇ ಬಾಕಿ ಇಲ್ಲದಿದ್ದಲ್ಲಿ, ಠೇವಣಿಯನ್ನು ಹಿಂತಿರುಗಿಸಲಾಗುತ್ತದೆ.

೩. ಆಯಾ ಸಂಚಿಕೆಯ ಪ್ರಕಟಣೆಯ ದಿನಾಂಕದಿಂದ ಒಂದು ವಾರದೊಳಗಾಗಿ ತಲುಪಿದ ಪ್ರತಿಗಳ ಮೊಬಲಗನ್ನು, ಶೇ. ೨೦ ರಷ್ಟು ಸೋಡಿ ಕಳೆದು, ಸಲ್ಲಿಸತಕ್ಕದ್ದು. ಇಲ್ಲವಾದರೆ ಮುಂದಿನ ಸಂಚಿಕೆಗಳನ್ನು ಸರಬರಾಜು ಮಾಡಲಾಗುವುದಿಲ್ಲ. ಜತೆಗೆ ಆ ಮೊಬಲಗನ್ನು ಠೇವಣಿಯಲ್ಲಿ ಮುರಿದುಕೊಳ್ಳಲಾಗುತ್ತದೆ.

೪. ರವಾನೆ ಮಾಡಿದ ಪ್ರತಿಗಳು ಹೆಚ್ಚುಕಡಿಮೆ ಇದ್ದರೆ ಕೂಡಲೇ ತಿಳಿಸತಕ್ಕದ್ದು. ಆ ವಾರ ಕಳೆದಮೇಲೆ ಬರುವ ದೂರುಗಳನ್ನು ಗಮನಿಸುವುದಿಲ್ಲ.

೫. ಮಾರಾಟವಾದ ಪತ್ರಿಕೆಗಳ ಮೇಲೆ ಶೇ. ೨೦ ರಷ್ಟು ಸೋಡಿ ಕೊಡಲಾಗುತ್ತದೆ. ಏಜಂಟರು ಸೋಡಿ ಮೊಬಲಗನ್ನು ಮುರಿದು ಕೊಂಡು, ಉಳಿದ ಮೊತ್ತವನ್ನು ಪಾವತಿ ಮಾಡಬಹುದು.

೬. ಯಾವ ಸಂದರ್ಭದಲ್ಲಿಯೂ ಮಾರಾಟವಾಗದ ಪ್ರತಿಗಳನ್ನು ವಾಪಸ್ಸು ತೆಗೆದುಕೊಳ್ಳುವುದಿಲ್ಲ.

೭. ಪತ್ರಿಕೆಯ ಪ್ರಸಾರಕ್ಕೆ ಬಾಧಕವಾಗುವಂತಹ ಸಂದರ್ಭದಲ್ಲಿ ಏಜೆನ್ಸಿಯನ್ನು ರದ್ದುಮಾಡುವ ಅಧಿಕಾರ ವಿತರಕರಿಗೆ ಇರುತ್ತದೆ.

೮. ಹಾಲಿ ಏಜೆಂಟರಿಗಿಂತ ಹೆಚ್ಚಿನ ಬೇಡಿಕೆ ಸಲ್ಲಿಸುವವರು ಮುಂದೆ ಬಂದರೆ ಅವರಿಗೆ ಏಜೆನ್ಸಿ ನೀಡುವ ವಿವೇಚನೆಯ ಅಧಿಕಾರ ವಿತರಕರದ್ದಾಗಿರುತ್ತದೆ.

ಈ ನಿಯಮಗಳಿಗೆ ಒಪ್ಪಿ ಏಜೆಂಟರಾಗ ಬಯಸುವವರು, ನಿಗಧಿತ ಠೇವಣಿಯೊಂದಿಗೆ ಮಾರಾಟ ನಿರ್ವಾಹಕ, ಚೇತನ ಕನ್ನಡ ಸಂಘ, ಚಾಮರಾಜ ಜೋಡಿ ರಸ್ತೆ, ಮೈಸೂರು ಇವರಿಗೆ ಬರೆಯಬೇಕೆಂದು ಕೋರಲಾಗಿದೆ.

ಮಾರಾಟ ನಿರ್ವಾಹಕ<br>
ಚೇತನ ಕನ್ನಡ ಸಂಘ<br>
ಮೈಸೂರು–೪.

# ನಿರಂತರ ಹೋರಾಟ: ಸತ್ಯಕ್ಕೆ ನಿಷ್ಠೆಗೆ ಅಹಿಂಸೆಗೆ ಗೆಲವು



"ಕೆಲಸವಿಲ್ಲದೆ ಕೈಲಿ ಕಾಸಿಲ್ಲದೆ ಜಯರಾಮಯ್ಯ ಮೂರು ನಾಲ್ಕು ವರ್ಷಗಳಲ್ಲಿ ಎಷ್ಟು ಹೊತ್ತು ಅನ್ನ ಕಂಡರೊ ತಿಳಿಯದು. ಹಗಲೆಲ್ಲ ಸುವೇಗದಂತೆ ನಗುಮುಖದಿಂದ ನಡೆಯುತ್ತಿದ್ದ ಜಯರಾಮಯ್ಯ ಕತ್ತಲಲ್ಲಿ ಒಂಟಿಯಾಗಿ ನಿಧಾನಿಸಿ, ಕಷ್ಟಹೊತ್ತು ನಡೆಯುತ್ತಿದ್ದರು."

ನಮ್ಮ ಕೆ. ಎಂ. ಜಯರಾಮಯ್ಯನವರಿಗೆ ಈಗ ಮಾನಸಗಂಗೋತ್ರಿಯಲ್ಲಿ ಮತ್ತೆ ಅಧ್ಯಾಪಕ ವೃತ್ತಿ ಸಿಕ್ಕಿದೆ. ಮೂರ್‍ನಾಲ್ಕು ವರ್ಷದ ಕೆಳಗೆ ಡಿ. ವಿ. ಅರಸರು ಉಪಕುಲಪತಿಗಳಾಗಿದ್ದು ಸಸ್ಯಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಗೋವಿಂದಪ್ಪನವರಿದ್ದ ಕಾಲದಲ್ಲಿ ಶ್ರೀ ಜಯರಾಮಯ್ಯ ಗಂಗೋತ್ರಿಯಲ್ಲಿ ಪಾಠಮಾಡಲು ಅನರ್ಹ ಎಂದು ಹುಸಿ ಕಾರಣಕೊಟ್ಟು ಯುವರಾಜ ಕಾಲೇಜಿಗೆ ಎತ್ತಿ ಹಾಕಿದ್ದರು. ವಿಭಾಗದ ಮುಖ್ಯಸ್ಥ ಗೋವಿಂದಪ್ಪನ ಸೇಡಿಗೆ ಸಿಕ್ಕಿ ಜಯರಾಮಯ್ಯ ಪ್ರತಿಭಾವಂತ ಅಧ್ಯಾಪಕರಾಗಿದ್ದು ಇದಾಗಿತ್ತು. ಬುಡುಬುಡಿಕೆ ಜನಾಂಗದಲ್ಲಿ ಹುಟ್ಟಿದಕ್ಕಾಗಿ, ಹುಟ್ಟಿ ತಲೆ ಎತ್ತಿ ನಡೆದದ್ದಕ್ಕಾಗಿ ಜಯರಾಮಯ್ಯ 'ಅನರ್ಹ'ರಾಗಿದ್ದರು!

ಆದರೆ ಜಯರಾಮಯ್ಯ ಯುವರಾಜ ಕಾಲೇಜಿನ ಕೆಲಸಕ್ಕೆ ಹೋಗದೆ ಪ್ರತಿಭಟಿಸಿದರು. ದಲಿತ ವಿದ್ಯಾರ್ಥಿ ಒಕ್ಕೂಟ ಹೆಂಗಸರು, ಮಕ್ಕಳು, ಕಾರ್ಮಿಕರೊಡಗೂಡಿ ತಿಂಗಳಾನುಗಟ್ಟಲೆ ಧರಣಿ ನಡೆಸಿತು. ರಾಜ್ಯಪಾಲ ಗೋವಿಂದನಾರಾಯಣರು ಮಾತುಕೊಟ್ಟು ಚಳವಳಿ ಹಿಂತೆಗೆಸಿ ಗೋವಿಂದ ಮಾಡಿದರು. ಫಲವಾಗಿ ಜಯರಾಮಯ್ಯ ಕೆಲಸವಿಲ್ಲದೆ ಮೂರ್‍ನಾಲ್ಕು ವರ್ಷ ಸವೆದರು. "ಅನರ್ಹ ಎಂದಾದರು ಸಾಬೀತು ಪಡಿಸಲಿ ಅಥವಾ ಅದೇ ಕೆಲಸ ಅಲ್ಲೆ ಕೊಡಲಿ" ಎಂದು ಜಯರಾಮಯ್ಯ ನಿಂತ ನಿಲುವಿಂದ ಅಲುಗಾಡಲಿಲ್ಲ. ಹೆಚ್ಚಿಗೆ ಸಂಬಳದ ಯುವರಾಜ ಕಾಲೇಜಿಗೆ ಅನೇಕ ಸಲ ಕೆಲಸ ಸಿಕ್ಕರು ಅದನ್ನು ತಿರಸ್ಕರಿಸಿದರು. 'ಈ ಹಠ ಬಿಡಿ, ಕ್ಲಾಸ್ ಒನ್ ಕೆಲಸ ಕೊಡಿಸುವೆ' ಎಂದು ಶ್ರೀ ಕೆ. ಹೆಚ್. ರಂಗನಾಥ್‌ರು ಹೇಳಿದಾಗಲೂ ಅದಕ್ಕೂ ಆಸೆ ಪಡಲಿಲ್ಲ. ಇನ್ನೂ ದೊಡ್ಡದೆಂದರೆ ಯಾವ ಗಳಿಗೆಯಲ್ಲೂ ಜಯರಾಮಯ್ಯ ದ್ವೇಷದಿಂದ ಉರಿಯಲಿಲ್ಲ. ಜಯರಾಮಯ್ಯನವರನ್ನು ಜಾತಿ ಹೆಸರಿಡಿದು ಗೇಲಿ ಮಾಡುತ್ತಿದ್ದ ಕ್ಷುಲ್ಲಕ ಗೋವಿಂದಪ್ಪನಬಗ್ಗೂ ಯಾವ ಹಂತದಲ್ಲೂ ಪ್ರಕಟನೆಯಲ್ಲೂ ನಿಂದಿಸಲಿಲ್ಲ. ಅಷ್ಟೇಕೆ ಆ ಹತಾಶಗಳಿಗೆಗಳಲ್ಲೂ ಜಯರಾಮಯ್ಯ ಕೆಲಸ ಕಳೆದ ಡಿ.ವಿ. ಅರಸ್ ಬಗ್ಗೆಯೇ ಪ್ರೀತಿ ಇಟ್ಟುಕೊಂಡಿದ್ದರು. ಡಿ. ವಿ. ಅರಸ್ ಮತ್ತು ಗೋವಿಂದಪ್ಪ ಅಂಡ್‌ಕೊಗೆ ಕೊನೆ ಕಾಣಿಸುವೆವು ಎಂದು ಒಂದು ಬಸ್ಸು ಜನ ಬಂದು ನಿಂತಾಗ ಜಯರಾಮಯ್ಯ ತಡೆದರು. ತಾವು ನಂಬಿದ್ದಕ್ಕೆ ಸತ್ಯ, ಅಹಿಂಸೆ, ನಿಷ್ಠೆ ಪ್ರಯತ್ನಕ್ಕೆ ತಮ್ಮನ್ನು ಅರ್ಪಿಸಿಕೊಂಡು ಕಾದರು.

ಕಾಯುವುದು–ಕೆಲಸವಿಲ್ಲದೆ ಕೈಲಿ ಕಾಸಿಲ್ಲದೆ ಜಯರಾಮಯ್ಯ ಮೂರ್‍ನಾಲ್ಕು ವರ್ಷಗಳಲ್ಲಿ ಎಷ್ಟು ಹೊತ್ತು ಅನ್ನ ಕಂಡರೊ ತಿಳಿಯದು. ಹಗಲೆಲ್ಲ ಸುವೇಗದಂತೆ ನಗುಮುಖದಿಂದ ನಡೆಯುತ್ತಿದ್ದ ಜಯರಾಮಯ್ಯ ಕತ್ತಲಲ್ಲಿ ಒಂಟಿಯಾಗಿ ನಿಧಾನಿಸಿ ಕಷ್ಟಹೊತ್ತು ನಡೆಯುತ್ತಿದ್ದರು. ಈ ನಡಿಗೆಗೆ ಒಂದು ಕೊನೆ ಕಾಣಿಸಲು ಜಯರಾಮಯ್ಯ ಆಮರಣಾಂತ ಉಪವಾಸಕ್ಕೆ ಇನ್ನೇನು ಕೂರಬೇಕೆನ್ನುವಾಗ ಅವರಿಗೆ ಜಯಲಭಿಸಿತು. ಈ ಜಯ ಜಯರಾಮಯ್ಯನವರಿಗೆ ಮಾತ್ರವಲ್ಲ—ಸತ್ಯಕ್ಕೆ, ನಿಷ್ಠೆಗೆ ಅಹಿಂಸೆಗೆ, ಪ್ರಯತ್ನಕ್ಕೆ.

---

[ಆರನೇ ಪುಟದಿಂದ]

ಡಿಸೆಂಬರ್ 31–1974 ರ ಒಳಗೆ ತಹಶೀಲ್ದಾರರಿಗೆ ಡಿಕ್ಲರೇಶನ್ ಸಲ್ಲಿಸಬೇಕು. ಒಂದು ವೇಳೆ ಈ ವಿವರಗಳನ್ನು ಸಲ್ಲಿಸದಿದ್ದರೆ ಅಥವಾ ತಪ್ಪು ವಿವರಗಳನ್ನು ಸಲ್ಲಿಸಿದರೆ 500 ರೂ.ಗಳ ದಂಡನೆಗೆ ಒಳಗಾಗುತ್ತಾನೆ. 1975 ರ ಭೂಸುಧಾರಣಾ ತಿದ್ದುಪಡಿ ಕಾಯಿದೆ ಪ್ರಕಾರ 18–11–61 ರ ನಂತರ ನಡೆದಿರುವ ಎಲ್ಲಾ ಭೂ ಮಾರಾಟದ ವಿವರಗಳನ್ನೂ ಒಳಗೊಂಡು 3 ತಿಂಗಳ ಒಳಗಾಗಿ ಡಿಕ್ಲರೇಶನ್ ಸಲ್ಲಿಸಬೇಕು. ಇದಕ್ಕೆ ತಪ್ಪಿದವರು 6 ತಿಂಗಳ ಕನಿಷ್ಟ ಜೈಲುವಾಸ ಅಥವಾ 5 ಸಾವಿರ ರೂ.ಗಳ ದಂಡವನ್ನು ತೆರಬೇಕಾಗುತ್ತದೆ.

ಸೆಪ್ಟಂಬರ್ 1975ರಲ್ಲಿ ತಿದ್ದುಪಡಿಯಾದ ಈ ಕಾನೂನಿನ ಅಡಿಯಲ್ಲಿ ಎಷ್ಟು ಮಂದಿ ಭೂಮಾಲಿಕರು ಶಿಕ್ಷೆಗೆ ಒಳಗಾಗ್ಗಿದ್ದಾರೆ ಅನ್ನುವುದನ್ನು ಸರ್ಕಾರ ಬಹಿರಂಗ ಗೊಳಿಸಬಾರದೇಕೆ? ಇಲ್ಲಿ ನನಗಿರುವ ಅನುಮಾನವೆಂದರೆ ತೋರಿಕೆಗೆ ಪ್ರಗತಿಪರವಾಗಿ ಕಾಣಿಸುವುದಕ್ಕೆ ಈ ಕಾನೂನು ಮಾಡಿದ್ದೆ ಹೊರತು ತಪ್ಪಿತಸ್ಥ ಭೂಮಾಲಿಕರನ್ನು ಶಿಕ್ಷಿಸುವುದಕ್ಕಲ್ಲ. ನನಗೆ ಕಂಡಮಟ್ಟಿಗೆ ಒಬ್ಬನೇ ಒಬ್ಬ ಭೂಮಾಲಿಕ ಕೂಡ ಈ ಶಿಕ್ಷೆಗೆ ಒಳಗಾಗಿಲ್ಲ. ಈಗಲೂ ಭೂಮಿತಿಗಿಂತ ಹೆಚ್ಚು ಭೂಮಿಯನ್ನಿಟ್ಟುಕೊಂಡು ಡಿಕ್ಲರೇಷನ್ ಸಲ್ಲಿಸದಿರುವ ಭೂಮಾಲಿಕರು ಸಾವಿರಾರು ಗಟ್ಟಲೆ ಇದ್ದಾರೆ. ತಾಕತ್ತಿರುವ ಸರ್ಕಾರ ಕಾನೂನಿನ ಪ್ರಕಾರ ಈ ಭೂಮಾಲಿಕರನ್ನು ಶಿಕ್ಷಿಸದೆ ಬಿಡುತ್ತಿರುವುದೇಕೆ? ಈ ಸರ್ಕಾರ ಭೂಮಾಲಿಕರ ವಿರುದ್ಧ ಕಾನೂನಿನ ಕ್ರಮ ಕೈಗೊಳ್ಳಲು ಹೆದರುತ್ತದೆಯೇ ಅಥವಾ ಭೂಮಾಲೀಕರೇ ಸರ್ಕಾರವನ್ನು ತಮ್ಮ ಕೈಯ್ಯಲ್ಲಿ ಇಟ್ಟುಕೊಂಡಿದ್ದಾರೆಯೇ ಅನ್ನುವ ಅನುಮಾನಗಳು ಹುಟ್ಟುವುದು ಸಹಜ.

(ಮುಗಿಯಿತು)

ಸಂಪಾದಕ: ಹುಲ್ಲುಕೆರೆ ಮಹದೇವ, ಪ್ರಕಾಶಕ: ಗೋವಿಂದಯ್ಯ, ವಿನಯ ಪ್ರಿಂಟರಿ, 2514, ಎ, ಕೆ. ಜಿ. ಕೊಪ್ಪಲು, ಮೈಸೂರು–14.